# ಶ್ರೀ ಶ್ರೀಪಾದರಾಜರ
# ಸ್ತೋತ್ರಗಳು ಮತ್ತು ಸ್ತುತಿಗಳು
## (ಕನ್ನಡಾನುವಾದ ಸಹಿತ)



ಸಂಪಾದಕರು, ಅನುವಾದಕರು
ಸಿ. ನಾರಾಯಣ ರಾವ್

ಶ್ರೀ ವ್ಯಾಸರಾಜವಿರಚಿತ

# ಶ್ರೀ ಶ್ರೀಪಾದರಾಜಪಂಚಕಮ್

ವಂದೇ ಶ್ರೀಪಾದರಾಜಂ ರುಚಿತಮಹೃದಯಂ ಪೂಜಿತಶ್ರೀಸಹಾಯಂ
ನಿರ್ಧೂತಾಶೇಷಹೇಯಂ ನಿಭೃತಶುಭಚಯಂ ಭೂಮಿದೇವಾಭಿಗೇಯಮ್ ।
ವಿಪ್ರೇಭ್ಯೋ ದತ್ತದೇಯಂ ನಿಜಜನಸದಯಂ ಖಂಡಿತಾಶೇಷಮಾಯಂ
ನಿಷ್ಟಪ್ತಸ್ವರ್ಣಕಾಯಂ ಬಹುಗುಣನಿಲಯಂ ವಾದಿಸಂಘೈರಜೇಯಮ್ ॥ ೧ ॥

ಅತ್ಯಂತ ಶುದ್ಧಾಂತಃಕರಣರೂ, ಲಕ್ಷ್ಮೀಪತಿಯನ್ನು ಪೂಜಿಸಿದವರೂ, ಸಮಸ್ತಹೇಯಗುಣರಹಿತರೂ, ಕಲ್ಯಾಣಗುಣಸಂಪನ್ನರೂ, ಬ್ರಾಹ್ಮಣರಿಂದ ಹೊಗಳಲ್ಪಟ್ಟವರೂ, ಬ್ರಾಹ್ಮಣರಿಗೆ ಜ್ಞಾನಾದ್ಯನೇಕದಾತೃಗಳೂ, ಭಕ್ತಜನಪ್ರಿಯರೂ, ಸಕಲಮೋಹನಾಶಕರೂ, ಪುಟವಿಕ್ಕಿದ ಚಿನ್ನಕ್ಕೆ ಸಮಾನವಾದ ಕಾಂತಿಯುಳ್ಳ ದೇಹವುಳ್ಳವರೂ, ಸಮಸ್ತಸದ್ಗುಣಗಳಿಗೆ ಆಧಾರಭೂತರೂ, ಪ್ರತಿಪಕ್ಷಿಗಳ ಸಮೂಹಗಳಿಂದ ಸರ್ವಥಾ ಅಜೇಯರೂ ಆದ ಶ್ರೀಪಾದರಾಜಗುರುಗಳನ್ನು ನಮಸ್ಕರಿಸುತ್ತೇನೆ.

ಕ್ಷುಭ್ಯದ್ವಾದಿಕರೀಂದ್ರವಾದಪಟಲೀಕುಂಭಚ್ಛಟಾಭೇದನ-
ಪ್ರೌಢಪ್ರಾಭವತರ್ಕಸಂಘನಿಕರಶ್ರೇಣೀವಿಲಾಸೋಜ್ವಲಃ ।
ಗೋಪೀನಾಥಮಹೀಧ್ರಶೇಖರಲಸತ್ಪಾದಸ್ಥಲಾವಾಸಕೃತ್
ಪಾಯಾನ್ಮಾಂ ಭವಘೋರಕುಂಜರಭಯಾಚ್ಛ್ರೀಪಾದರಾಟ್ ಕೇಸರೀ ॥ ೨ ॥

ವ್ಯಾಕುಲಿತವಾದ ಪ್ರತಿಪಕ್ಷದಿಗ್ಗಜಗಳ ಕುಂಭಸ್ಥಳಗಳನ್ನು ತಮ್ಮ ಯುಕ್ತಿ ಸಮೂಹಗಳೆಂಬ ಹರಿತವಾದ ಉಗುರುಗಳಿಂದ ಸೀಳುತ್ತಿರುವ, ಗೋಪೀನಾಥ ದೇವರೆಂಬ ಪರ್ವತಶ್ರೇಷ್ಠದ ಪಾದದಲ್ಲಿ ವಾಸಮಾಡುವವರಾದ ಶ್ರೀಪಾದರಾಜರೆಂಬ ಸಿಂಹವು ಸಂಸಾರರೂಪವಾದ ಮದ್ದಾನೆಯ ಭಯದಿಂದ ನಮ್ಮನ್ನು ರಕ್ಷಿಸಲಿ.

ಬಿಭ್ರಾಣಂ ಕ್ಷೌಮವಾಸಃ ಕರಧೃತವಲಯಂ ಹಾರಕೇಯೂರಕಾಂಚೀ-
ಗ್ರೈವೇಯಸ್ವರ್ಣಮಾಲಾಮಣಿಗಣಖಚಿತಾನೇಕಭೂಷಾಪ್ರಕರ್ಷಮ್ ।
ಭುಂಜಾನಂ ಷಟ್ಪಶಾಕಾನ್ ಹಯಗಜಶಿಬಿಕಾನರ್ಘ್ಯಶಯ್ಯಾರಥಾಢ್ಯಮ್
ವಂದೇ ಶ್ರೀಪಾದರಾಜಂ ತ್ರಿಭುವನವಿದಿತಂ ಘೋರದಾರಿದ್ರ್ಯಶಾಂತ್ಯೈ ॥ ೩ ॥

ಪೀತಾಂಬರಧಾರಿಗಳೂ, ವಿವಿಧ ರತ್ನಖಚಿತ ಕಡಗಭುಜಕೀರ್ತಿ ಬಾಜಾ ಬಂದಿಗಳು ಇವುಗಳಿಂದ ಅಲಂಕೃತವಾದ ಬಾಹುಯುಗ್ಮವುಳ್ಳವರೂ, ಸುವರ್ಣ ರಚಿತವಾದ ಕಂಠಹಾರ ಮುಂತಾದ ಆಭರಣಗಳಿಂದ ಅಲಂಕೃತರೂ, ಪ್ರತಿನಿತ್ಯವೂ ಅರವತ್ತು ಬಗೆಯ ಶಾಕ, ಭಕ್ಷ್ಯ, ಭೋಜ್ಯ, ಲೇಹ್ಯಪೇಯಗಳುಳ್ಳ ಮೃಷ್ಟಾನ್ನ ಭೋಕ್ತರೂ, ಪಾತಾಳ-ಭೂಮಿ-ದೇವಲೋಕಗಳಲ್ಲಿ ಪ್ರಸಿದ್ಧರೂ, ಅತ್ಯಧಿಕ ಬೆಲೆಯುಳ್ಳ ಗಜ, ಶಿಬಿಕ, ಶಯ್ಯಾರಥಾದಿಗಳನ್ನುಳ್ಳವರೂ, ಆದ ಶ್ರೀಪಾದರಾಜ ರನ್ನು ಸಂಸಾರರೂಪವಾದ ಕಠಿಣವಾದ ದಾರಿದ್ರ್ಯನಾಶಕ್ಕಾಗಿ ಸೇವಿಸುತ್ತೇನೆ.

**ಯದ್ವೃಂದಾವನಸೇವಯಾ ಸುವಿಮಲಾಂ ವಿದ್ಯಾಂ ಪಶೂನ್ ಸಂತತಿಂ**
**ಧ್ಯಾನಾತ್ ಜ್ಞಾನಮನಲ್ಪಕೀರ್ತಿನಿವಹಂ ಪ್ರಾಪ್ನೋತಿ ಶೀಘ್ರಂ ಜನಃ ।**
**ತಂ ವಂದೇ ನರಸಿಂಹತೀರ್ಥನಿಲಯಂ ಶ್ರೀವ್ಯಾಸರಾಟ್ ಪೂಜಿತಂ**
**ಧ್ಯಾಯಂತಂ ಮನಸಾ ನೃಸಿಂಹಚರಣಂ ಶ್ರೀಪಾದರಾಜಂ ಗುರುಮ್ ॥ ೪ ॥**

ಯಾವ ಶ್ರೀಪಾದರಾಜರ ವೃಂದಾವನ ಸೇವೆಯಿಂದ ಮೋಕ್ಷಸಾಧಕ ವಿದ್ಯೆಯೂ, ಪಶುಸಂಪತ್ತೂ, ಸಂತತಿಸಂಪತ್ತೂ ಲಭ್ಯವಾಗುತ್ತವೆಯೋ, ಯಾರ ನಾಮಸ್ಮರಣೆಯಿಂದಲೇ ಜ್ಞಾನಾಭಿವೃದ್ಧಿಯನ್ನೂ, ಮಹತ್ಕೀರ್ತಿ ಸಮೂಹವನ್ನೂ, ಶೀಘ್ರದಲ್ಲಿಯೇ ಜನರು ಪಡೆಯುತ್ತಾರೆಯೋ ಅಂಥ ನೃಸಿಂಹತೀರ್ಥವಾಸಿಗಳೂ, ಶ್ರೀ ವ್ಯಾಸರಾಜರಿಂದ ಪೂಜಿತರೂ, ಸದಾ ನೃಸಿಂಹದೇವರ ಚರಣಾರವಿಂದದ ಸ್ಮರಣೆಯಲ್ಲಿಯೇ ನಿರತರೂ ಆದ ಶ್ರೀಪಾದರಾಜಗುರುಗಳನ್ನು ನಮಸ್ಕರಿಸು ತ್ತೇನೆ.

**ಕಾಶೀಕೇದಾರಮಾಯಾಕರಿಗಿರಿಮಧುರಾದ್ವಾರಕಾವೇಂಕಟಾದ್ರಿ-**
**ಶ್ರೀಮುಷ್ಣಕ್ಷೇತ್ರಪೂರ್ವತ್ರಿಭುವನವಿಲಸತ್ಪುಣ್ಯಭೂಮೀನಿವಾಸಃ ।**
**ಗುಲ್ಮಾದಿವ್ಯಾಧಿಹರ್ತಾ ಗುರುಗುಣನಿಲಯೋ ಭೂತಭೇತಾಲಭೇದೀ**
**ಭೂಯಾಚ್ಛ್ರೀಪಾದರಾಜೋ ನಿಖಿಲಶುಭತತಿಪ್ರಾಪ್ತಯೇ ಸಂತತಂ ನಃ ॥ ೫ ॥**

ಇತಿ ಶ್ರೀ ವ್ಯಾಸರಾಜಯತಿಕೃತ ಶ್ರೀಪಾದರಾಜಪಂಚಕಂ ಸಂಪೂರ್ಣಮ್

ಕಾಶಿ, ಕೇದಾರ, ಮಾಯಾಪುರಿ (ಹರಿದ್ವಾರ), ಕರಿಗಿರಿ (ದೇವರಾಯನದುರ್ಗ), ಮಧುರಾ, ದ್ವಾರಕಾ, ವೇಂಕಟಾದ್ರಿ, ಶ್ರೀಮುಷ್ಣ ಮುಂತಾದ, ತ್ರಿಲೋಕಗಳಲ್ಲಿಯೂ ಪ್ರಸಿದ್ಧವಾದ ಪುಣ್ಯಭೂಮಿಗಳೇ ವಾಸಸ್ಥಾನವಾಗಿ ಉಳ್ಳವರೂ, ಗುಲ್ಮವ್ಯಾಧಿ ಮುಂತಾದ ಅನೇಕ ವ್ಯಾಧಿಪರಿಹಾರಕರೂ, ಸಮಸ್ತಕಲ್ಯಾಣಗುಣಗಣಗಳಿಗೆ ಆಧಾರಭೂತರೂ, ಭೂತಭೇತಾಳ ಮುಂತಾದ ದುಷ್ಟಗ್ರಹಗಳ ನಾಶಕರೂ ಆದ ಶ್ರೀಪಾದರಾಜರು ನಮಗೆ ಯಾವಾಗಲೂ ಸನ್ಮಂಗಳವನ್ನು ಮಾಡುತ್ತಾ ಅನುಗ್ರಹಿಸಲಿ.

ಶ್ರೀ ವ್ಯಾಸರಾಜಮುನಿಗಳಿಂದ ರಚಿತವಾದ ಶ್ರೀಪಾದರಾಜಪಂಚಕವು ಮುಗಿಯಿತು.

### ಶ್ರೀ ವಾದಿರಾಜತೀರ್ಥ ವಿರಚಿತ

# ಶ್ರೀ ಶ್ರೀಪಾದರಾಜ ಸ್ತೋತ್ರಮ್

ಅಶ್ವಧಾಟೀ

ದ್ವೈಪಾಯನೋತ್ತಮ ಕರೋಪಗತಾಂ ಪವನರೂಪಾಮಿತೇಕ್ಷಮಹಿತಾಂ
ಗೋಪಾಂಗನೇಶತನುಮಾಪಾತಮರ್ಚಯಿತುಮಾಪಾದ್ಯ ಯೋಽಹಿ
ಯತಿತಾಮ್ ।
ಸ್ವಾಪಾಸ್ತ ಭೂಪಕೃತ ಶಾಪಾಸಿಘಾತ ನಿಜತಾಪಾರಪಾಪ ನಿಚಯಂ
ಶ್ರೀಪಾದರಾಜವರಶಾಪಾಯುದಂಭಜತಸೂಪಾನ್ನ ಲೋಲುಪಧಿಯಃ ॥ ೧ ॥

ಕಾಪಾಲಿಕಾಂಶ ವರಕೋಪಾತಿವಿತ್ತಯತಿ ಭೂಪಾರಕಾಂಕ್ಷಿಕುಲಭೂ
ಭೂಪಾವನಾಮಿತ ಧಿಯಾಪಾವಿತಾತಿಶುಭರೂಪಾಬ್ಜನಾಭ ಸುಯತೇಃ ।
ಗೋಪಾಯಿತಾನ್ವಯ ಸುದೀಪಾಭಹೇಮಸಮರೂಪಾಖ್ಯ ಭಿಕ್ಷು ವರಭೂಃ
ಶ್ರೀಪಾದರಾಜಯತಿರಾಪಾತುನಃ ಶುಭಕಲಾಪಾನಪಾರಮಹಿಮಾ ॥ ೨ ॥

ಗೋಪಾಲವಿಠ್ಠಲತನೂಪಾರ್ಥಭಲ್ಲುಕಸುತೋಽಪಾಸಿತೇಸಮಹಿಳೇ
ದೀಪಾದ್ಯವಿತ್ತಭವನಾಪಾಲತೇ ಕುರುಕುಲಾಪಾಯ ಭೂನೃಪತಿನಾ ।
ಪ್ರಾಪಾದಿಮಾದಿಶದಥೋಽಪಾಕ ಶಿಷ್ಯಯತಯೇ ಪಾದುಕೇತಮನಯೋಃ
ಶ್ರೀಪಾದರಾಜಯತಿರಾಪಾತುನೋ ರಚಿತ ಭೂಪಾಲ ಪೀಠವಸತಿಃ ॥ ೩ ॥

ಯೋಽಪಾಗಮತ್ಸ್ವಪುರತೋಽಪಾಸ್ತಬಂಧುಜನತಾಪಾರಿಬರ್ಹ ಸುಹೃದಾ-
ಲಾಪಾದಿರಾಗ ಉರುಭೂಪಾಲವರ್ಯಜನ ಗೋಪಾಂಗ ಹಾಪಿತತನುಃ ।
ಧೂಪಾಯಿತಾಂತರ ಇವಾಪಾಟವೀಂ ನಿಶಿತರೋಽಪಾಭಮಾತೃವಚಸಾ
ಗೋಪಾಯಿತಾತ್ಮತನುಭೂಪಾಮರಾರ್ಯಜನ ಗೋಪಾರವಶ್ಯಕರಭಾಃ ॥ ೪ ॥

ಹಾಪಾಕ ಆಗತ ಇಹಾಪಾಪ ಸೇವ್ಯಮಭಿರೂಪಾಮರದ್ರುಮಿತಿಮಾಮ್
ಶ್ರೀಪಾಲಯಾಪಿತ ಮಹೀಪಾರಗಾಮಿಸುರಶಾಪಾಯುಧೋಕ್ತ ತಪಸಾ ।
ಕ್ಷ್ಮಾಪಾಲ ಪೀಠಮಥ ಗೋಪಾಲಸೇವ್ಯಪದಮಾಪಾಗ್ರ್ಯಜನ್ಮಗುರುತಾಮ್
ಶ್ರೀಪಾದರಾಜಯತಿರಾಪಾರಮತ್ಸ್ವಯಮಹಾಪಾಯತಃ ಸಪದಿನಃ ॥ ೫ ॥

ವ್ಯಾತ್ತಾನವಾಂತಕ ಸಮತ್ತಾಯುಧೋರುಭುಜ ವೈತ್ತಾಯನಿಧ್ವಜಿಚಮೂ-
ಚ್ಛೇತ್ತಾನುಜಾರ್ಥಮಿವ ಭೇತ್ತಾಸ್ವಕಾವತಮಸೋತ್ತಾನಪರ್ವತ ತತೇಃ ।
ಸ್ವಾತ್ತಾನಿಳಾಗಮ ಮಹೋತ್ತಾನತೀಕ್ಷ್ಣ ಪವಿರೌತ್ತಾನಪಾದ ಯತಿರಾಟ್
ವೇತ್ತಾ ಹಯಾನನತನೂತ್ತಾರಣಸ್ಯ ಮಮತೋತ್ತಾಭವಾರ್ತಿಮತುಳಾಮ್
॥ ೬ ॥

ಶ್ರೀಪಾದರಾಜಗುಣವರ್ಣನ ಪದ್ಯಷಟ್ಕಂ
ಶ್ರೀವ್ಯಾಸರಾಜಯತಿ ಶಿಷ್ಯಗಣರ್ಷಭೇಣ ।
ಶ್ರೀವಾದಿರಾಜಯತಿನಾ ರಚಿತಂ ತು ಶಶ್ವತ್
ಸೇವಾದರೇಣ ಪಠತಾಂ ಪ್ರಕರೋತ್ಯಭೀಷ್ಟಮ್ ॥ ೭ ॥

ಇತಿ ಶ್ರೀವಾದಿರಾಜತೀರ್ಥವಿರಚಿತ ಶ್ರೀಪಾದರಾಜ ಸ್ತೋತ್ರಂ ಸಂಪೂರ್ಣಂ

★ ★ ★

ಶ್ರೀ ವಿಜಯೀಂದ್ರಯತಿ ವಿರಚಿತ

# ಶ್ರೀ ಶ್ರೀಪಾದರಾಜಾಷ್ಟಕಮ್

ಶ್ರೀಮದ್ವೀರನೃಸಿಂಹನಾಮನೃಪತೇರ್ಭೂದೇವ ಹತ್ಯಾ ವ್ಯಥಾಮ್
ದೂರೀಕೃತ್ಯ ತದರ್ಪಿತೋಜ್ಜ್ವಲಮಹಾಸಿಂಹಾಸನೇ ಸಂಸ್ಥಿತಃ ।
ಶ್ರೀಮತ್ಪೂರ್ವಕವಾಟನಾಮಕಪುರೇ ಸರ್ವೇಷ್ಟ ಸಿದ್ಧಿಪ್ರದಃ
ಶ್ರೀ ಶ್ರೀಪಾದಯತೀಂದ್ರಶೇಖರಮಣೀ ಭೂಯಾತ್ಸನಃ ಶ್ರೇಯಸೇ ॥ ೧ ॥

ಸಾಳ್ವ ನರಸಿಂಹರಾಜನಿಗೆ ಒದಗಿಬಂದ ಭಯಂಕರ ಬ್ರಹ್ಮಹತ್ಯೆ ಎಂಬ ಪಾಪವನ್ನು ಅನಾಯಾಸವಾಗಿ ದೂರೀಕರಿಸಿದ ಮಹನೀಯರು, ಅವನು ಆದರ ಪೂರ್ವಕವಾಗಿ ಅರ್ಪಿಸಿದ ಸಿಂಹಾಸನದಲ್ಲಿ ಆಸೀನರಾದ ಸಂತರೂ ಹಾಗೂ ಮುಳಬಾಗಿಲು ಪಟ್ಟಣದಲ್ಲಿ ಎಲ್ಲರ ಅಭೀಷ್ಟಗಳನ್ನು ಪೂರೈಸುವ ಪರಮಪವಿತ್ರರಾದ ಶ್ರೀಪಾದರಾಜರು ನಮಗೆ ಮಂಗಳ ಮಾಡಲಿ.

ಭೇರೀ ಮಂಜುಳ ಕಾಹಲೀ ಮುಖ ಮಹಾನಾನಾವಿಧ ಪ್ರೋಜ್ಜ್ವಲ
ಧ್ವಾಂತಧ್ವಾನ ನಿರಸ್ತವಾದಿ ನಿಚಯಃ ಶ್ರೀಪಾದರಾಜೋಸ್ತು ನಃ ।
ಸೌವರ್ಣಾಮಲ ದಂಡಚಾಮರಸಿತಚ್ಛತ್ರೋರು ಹೈಮೋಲ್ಲಸತ್
ಯಷ್ಟಿದ್ವಂದ್ವಸುಪಂಚವರ್ಣವಸನೋ ಭೂಯಾತ್ಸ ನಃ ಶ್ರೇಯಸೇ ॥ ೨ ॥

ಭರ್ಜರಿಯಾದ ಭೇರಿ, ಮಂಜುಳನಾದ ಕಹಳೆ ಮೊದಲಾದ ವಿವಿಧ ವಾದ್ಯಗಳ ಧ್ವನಿಯಿಂದ ಶ್ರೀಪಾದರಾಜರ ವಾದವಿಜಯ ಎಲ್ಲರ ಕಿವಿಗಳಲ್ಲಿಯೂ ಮೊಳಗುತ್ತಿದ್ದಿತು. ಅವರ ರಾಜವೈಭವಕ್ಕೆ ಎಲ್ಲೆಯೇ ಇಲ್ಲ. ಕಂಗೊಳಿಸುವ ಸುವರ್ಣದಂಡ, ಚಾಮರ, ಶ್ವೇತಛತ್ರ, ಅಪರಂಜಿಯಿಂದ ಮನೋಹರವಾಗಿ ಶೋಭಿಸುವ ಐದು ವರ್ಣದ ವಸ್ತ್ರಗಳಿಂದ ವಿಶೇಷವಾಗಿ ಶೋಭಿಸುವ ಶ್ರೀಪಾದರಾಜರು ನಮಗೆ ಮಂಗಳ ಮಾಡಲಿ.

ಪಾದತ್ರಾಣಯುಗಂ ಕ್ವಣತ್ಸುಚರಣದ್ವಂದ್ವೇನ ಸಂಯೋಜ್ಯತತ್
ದುಶ್ಶಾಸ್ತ್ರಂ ಪದಕಂಜರಕ್ಷಣಯುಗೇ ಬಂದೀಕೃತಂ ಕೂಜತೀ ।
ಧೀರಾನ್ಮೋಚಯತೇತಿ ಬಂದಿಷು ಪುರೋಗರ್ಜತ್ಸು ಸಿಂಹಾಸನಮ್
ಗಚ್ಛನ್ಮೌಕ್ತಿಕ ಕಂಚುಕೋಜ್ಜ್ವಲತನುರ್ಭೂಯಾತ್ಸನಃ ಶ್ರೇಯಸೇ ॥ ೩ ॥

ಗೆಜ್ಜೆಯಿಂದ ಮಂಗಳಧ್ವನಿ ಮೊಳಗುವ ತಮ್ಮ ಪಾದಕಮಲಗಳಲ್ಲಿ ಹಾವಿಗೆಯನ್ನು ಮೆಟ್ಟಿಕೊಂಡು ದುಃಶಾಸ್ತ್ರವನ್ನು ತಮ್ಮ ಪಾದಕಮಲದ್ವಂದ್ವಗಳಲ್ಲಿ, ಬಂದಿಯಾಗಿಸಿ ಮರ್ದನಮಾಡುತ್ತಾ ಪ್ರತಿವಾದಿಗಳಿಗೆ ಸಾಧ್ಯವಿದ್ದರೆ ಬಂದು ಬಿಡಿಸಿಕೊಳ್ಳಿ ಎಂದು ಸವಾಲು ಎಸೆಯುತ್ತಾ ಎಲ್ಲರ ಎದುರಿಗೆ ಸಿಂಹಾಸನದ ಬಳಿ ಹೋಗುತ್ತಿರುವ ಮುತ್ತಿನಕವಚ ಮೇಲ್ಕುಲಾವಿಗಳಿಂದ ಕಂಗೊಳಿಸುವ ಶರೀರವುಳ್ಳ ಆ ಶ್ರೀಪಾದರಾಜರು ನಮಗೆ ಶ್ರೇಯಸ್ಸು ನೀಡಲಿ.

**ನಾನಾಶಾಕ ಸುಭಕ್ಷ್ಯಪಾಯಸಘೃತಂ ಪ್ರಾಜ್ಯಾನ್ನಭುಕ್ತ್ಯಾಜನೇ**
**ನಿಂದಾಂ ಕುರ್ವತಿ ಕಾನನಂ ಗತವತೇ ಯಸ್ಮೈ ದದೌ ಶ್ರೀಪತಿಃ ।**
**ಮೃಷ್ಟಾನ್ನಂ ಸಘೃತಂ ಪಯೋದಧಿಯುತಂ ಸೋಪಸ್ಕರಂ ಕಾನನೇ**
**ಗೋಪೀನಾಥಪದಾಬ್ಜ ಸಕ್ತಸುಮನಾಃ ಭೂಯಾತ್ಸನಃ ಶ್ರೇಯಸೇ ॥ ೪ ॥**

ಒಡವೆಯ ವೈಭವಕ್ಕಾಗಲೀ, ಒಡಲು ತುಂಬುವ ಅವರ ಕಾರುಣ್ಯಕ್ಕಾಗಲೀ ಕೊನೆಯೇ ಇಲ್ಲ. ಕೊನೆಯಿಲ್ಲದ ಕಾಯಿಪಲ್ಲೆಗಳು, ಬಗೆಬಗೆಯ ಭಕ್ಷ್ಯಗಳು, ಪರಮ ರುಚಿಕರವಾದ ಪಾಯಸ, ಸುರಿವ ತುಪ್ಪ ಮೊದಲಾದ ಭೂರಿಭೋಜನ ಮಾಡುವ, ಮಾಡಿಸುವ ಈ ಯತಿಯನ್ನು ಕಂಡು ಕೆಲವರು ಕರುಬಿದರು. ಕುತಂತ್ರದಿಂದ ದಾರಿ ತಪ್ಪಿಸಿ ಕಾಡುಪಾಲು ಮಾಡಿದ್ದರು. ಪರಿವಾರ ಕಾಡಿನಲ್ಲಿದ್ದರೂ ಪರಿಸ್ಥಿತಿ ಕಂಗೆಡಲಿಲ್ಲ, ಭೋಜನ ಬದಲಾಗಲಿಲ್ಲ. ಲಕ್ಷ್ಮೀಪತಿಯಾದ ರಂಗವಿಠಲ ಹಾಲು, ಮೊಸರು ತುಪ್ಪಗಳಿಂದ ತೋಯ್ದು ಹೋಗುವಂತಹ ಮೃಷ್ಟಾನ್ನವನ್ನು, ಕಾಯಿಪಲ್ಲೆಗಳನ್ನು ವ್ಯಂಜನಗಳನ್ನೂ ಕಾಡಿನಲ್ಲೇ ಕೊಟ್ಟ. ಅಂತಹ ಗೋಪೀನಾಥನ ಪಾದದಲ್ಲಿ ಭಕ್ತಿಯನ್ನೇ ಇಟ್ಟುಕೊಂಡ ಶ್ರೀಪಾದರಾಜರು ನಮಗೆ ಮಂಗಳ ಮಾಡಲಿ.

**ಚೈತ್ರೇಮಾಸಿ ಕಠೋರಭಾಸ್ಕರಕರೈಸ್ಸಂತಪ್ತಗಾತ್ರಾಖಿಲ**
**ಸ್ವಾಂತೇವಾಸಿಭಿರರ್ಥಿಭಿಃ ಸ್ವತಪಸಾ ನಿರ್ಮಾಯ ರಮ್ಯಂ ಸರಃ ।**
**ಸಾರಾಮೋ ಯತಿಪುಂಗವಃ ಪರಿಜನಾನಪ್ಯಾಯಯಾ ಮಾಸಯಾ-**
**ಚ್ಛಾಯತೋಯ ವಿಹೀನ ಕಾನನತಲೇಭೂರ್ಯಾತ್ಸನಃ ಶ್ರೇಯಸೇ ॥ ೫ ॥**

ನೀರು, ನೆರಳುಗಳಿಲ್ಲದೆ ಕಂಗೆಡುವ ಸೂರ್ಯನ ಕಠೋರಕಿರಣಗಳಿಂದ ಬೆಂಡಾಗಿ ಬೆವರುತ್ತಾ, ಬಳಲುತ್ತಿರುವ ತಮ್ಮ ಪರಿವಾರದವರನ್ನೂ ಬೇಸಿಗೆ ತಡೆಯಲಾರೆವೆಂದು ಬೇಡುವ ಭಕ್ತರನ್ನೂ ಕಂಡು ಶ್ರೀಪಾದರಾಜರ ಮನಸ್ಸು ಕರಗಿತು. ತಪಶ್ಶಕ್ತಿಯಿಂದಲೇ ರಮಣೀಯವಾದ ಸರೋವರ ನಿರ್ಮಿಸಿದರು.

ಎಲ್ಲರಿಗೂ ಆರಾಮ ನೀಡಿ ಆ ಮಾಸವನ್ನು ಆಪ್ಯಾಯಮಾನಗೊಳಿಸಿದರು. ಅವರ ಆಪ್ಯಾಯತೆಗೆ ಮಿತಿಯುಂಟೆ? ಹೀಗಾಗಿ ಅಂತಹ ಶ್ರೀಪಾದರಾಜರು ನಮಗೆ ಶ್ರೇಯಸ್ಸು ನೀಡಲಿ.

**ತ್ವಂ ಚೇನ್ಮಾಂ ಜಯಸಿದ್ಧಿಚಾಮರಧುನೀಂ ಗಚ್ಛಾವಿನೋಚೇತ್ತದಾ**
**ಸನ್ಯಸ್ಯೋಭವ ಪಂಡಿತೇತಿ ಸದಸೀ ಕ್ಷೋಣೀಪತೇ ಪತ್ರಿಕಾ ।**
**ಆಲೇಖ್ಯಪ್ರಿಯಶಿಷ್ಯವರ್ಯ ಯತಿನಾ ಯತ್ಯಾಶ್ರಮಂ ವಾದಿನಮ್**
**ಜಿತ್ವಾದಾಪಿತವಾಂಶ್ಚತಸ್ಯ ಸುಮತೀರ್ಭೂಯಾತ್ಸನಃ ಶ್ರೇಯಸೇ ॥ ೬ ॥**

ನೀವು ಗೆದ್ದರೆ ಸೋತ ನಾವು ಗಂಗಾಪಾಲಾಗಿ ಬಿಡುವೆವು. ಇಲ್ಲವಾದರೆ ನೀವು ಸೋತಲ್ಲಿ ಸನ್ಯಾಸಾಶ್ರಮವನ್ನೇ ಸ್ವೀಕರಿಸಬೇಕು, ಎಂದು ಸವಾಲು ಎಸೆದು ರಾಜರ ಮೂಲಕ ಪತ್ರವನ್ನು ಕಳಿಸಿ ವಾದ-ಪ್ರತಿವಾದದ ಸಿದ್ಧತೆ ನಡೆಸಿದರು. ಕಡೆಗೆ ತಮ್ಮ ಶಿಷ್ಯನ ಜೊತೆಯಲ್ಲೇ ಜರುಗಿದ ಆ ವಾದದಲ್ಲಿ, ಪ್ರತಿವಾದಿ ಸೋತುಹೋದನು. ಸನ್ಯಾಸತ್ವ ಒಪ್ಪಿಕೊಂಡ. ಅಂತಹ ಪ್ರತಿಭಾಸಂಪನ್ನರೂ ಪರಮ ತಪಸ್ವಿಗಳೂ ಆದ ಶ್ರೀಪಾದರಾಜರು ನಮಗೆ ಮಂಗಳ ಮಾಡಲಿ.

**ವೈರಾಗ್ಯಾಮಲಭಕ್ತಿನಿರ್ಮಲ ಮಹಾಜ್ಞಾನಾದಿ ಭಾಗ್ಯೋಜ್ಜ್ವಲಃ**
**ಶ್ರೀಮತ್ ಶ್ರೀಪತಿರಂಗವಿಟ್ಠಲ ಪದಾಂಭೋಜ ಪ್ರಭಾವಂ ಹೃದೀ ।**
**ಸ್ಮಾರಂಸ್ಮಾರಮಹರ್ನಿಶಂ ನಿಜಮಹಾನಂದಾಬ್ಧಿಮಗ್ನೋ ಗುರುಃ**
**ಲೋಕಾನಂದಕರೋರು ರಮ್ಯಮಹಿಮಾ ಭೂಯಾತ್ಸನಃ ಶ್ರೇಯಸೇ ॥ ೭ ॥**

ವೈರಾಗ್ಯ, ನಿರ್ವ್ಯಾಜವಾದ ಭಕ್ತಿ, ನಿರ್ಮಲವಾದ ಶ್ರೇಷ್ಠಜ್ಞಾನ ಇವುಗಳಿಂದ ಕಂಗೊಳಿಸುವ ಶ್ರೀಪಾದರಾಜರು ಹಗಲಿರುಳೂ ರಂಗವಿಠ್ಠಲನ ಪಾದಕಮಲಗಳ ಪ್ರಭಾವವನ್ನು, ತಮ್ಮ ಹೃದಯದಲ್ಲಿ ಮೆಲುಕುಹಾಕುವ ಮಹಾನುಭಾವರೂ ಆ ಆನಂದದಲ್ಲೇ ಮುಳುಗಿರುವ ಮಹದ್ಗುರುಗಳೂ ಲೋಕಕ್ಕೇ ಆನಂದ ನೀಡುವ ಈ ಸಂತರಮಹಿಮೆ, ರಮಣೀಯವಾದುದು. ಇವರು ನಮಗೆಲ್ಲರಿಗೂ ಮಂಗಳ ನೀಡಲಿ.

**ಯದ್ವೃಂದಾವನ ಸೇವಯಾ ಭುವಿ ಜನಃ ಪ್ರಾಪ್ನೋತಿ ಸೌಖ್ಯಂ ಮಹತ್**
**ಯದ್ವೃಂದಾವನ ಮೃತ್ತಿಕಾಪಿ ನಿಟಿಲೇ ಭಕ್ತ್ಯಾ ಧೃತಾ ಸೇವಿತಾ ।**
**ಭೂತೋಚ್ಚಾಟನಕಾರಿಣೀ ಕ್ಷಯಮಹಾಪಸ್ಮಾರಗುಲ್ಮಾದಿಕಾ**
**ನೇಕ ವ್ಯಾಧಿನಿವಾರಣೈಕಕರುಣಿರ್ಭೂಯಾತ್ಸನಃ ಶ್ರೇಯಸೇ ॥ ೮ ॥**

ಇತಿ ಶ್ರೀ ವಿಜಯೀಂದ್ರಯತಿ ವಿರಚಿತ ಶ್ರೀ ಶ್ರೀಪಾದರಾಜಷ್ಟಕಂ ಸಂಪೂರ್ಣಮ್

ಯಾರ ವೃಂದಾವನದ ಆರಾಧನಾ, ದರ್ಶನ, ಪ್ರದಕ್ಷಿಣ ಸೇವಾದಿಗಳ ಮನನ ದಿಂದಲೇ ಜನರಿಗೆ ಸೌಖ್ಯವು ಲಭಿಸುವುದೋ, ಯಾರ ವೃಂದಾವನದ ಮೃತ್ತಿಕೆ ಯನ್ನು ಶಿರದಲ್ಲಿ ಧರಿಸಿದ ಮಾತ್ರಕ್ಕೆ ಭೂತಗಳು ಬೆದರಿಬಿಡುವವೋ, ಕ್ಷಯ, ಮೂರ್ಛೆ, ಗುಲ್ಮಾ ಮಹಾರೋಗಗಳೂ ಸಹ ಮಾಯವಾಗುವವೋ ಅಂತಹ ಕರುಣಾಳುಗಳಾದ ಶ್ರೀಪಾದರಾಜರು ನಮಗೆ ಮಂಗಳ ಮಾಡಲಿ.

ಹೀಗೆ ಶ್ರೀ ವಿಜಯೀಂದ್ರತೀರ್ಥರಿಂದ ರಚಿಸಲ್ಪಟ್ಟ
ಶ್ರೀ ಶ್ರೀಪಾದರಾಜಾಷ್ಟಕವೆಂಬ ಸ್ತೋತ್ರವು ಮುಗಿಯಿತು.

★ ★ ★

ಶ್ರೀನಿಧಿಯತಿ ವಿರಚಿತ

# ಶ್ರೀ ಶ್ರೀಪಾದರಾಜಾಷ್ಟಕಮ್

ಶ್ರೀಮತ್ಯಾ ಜಾಂಬವತ್ಯಾ ಯದುಪತಿನಗರೇ ಪೂಜಿತಃ ಫಲ್ಗುಣೇನ
ಪ್ರಾಪ್ತಸ್ತೇನಾರ್ಚಿತಾಂಘ್ರಿಸ್ಸಕಲ ಸುಖಕರೇ ಪಾಂಡುರಂಗೇಽತರಂಗೇ ।
ಭೂಮೌಕ್ಷೇತ್ರೇಽಥ ಗುಪ್ತಸ್ಸಕಲ ಬುಧಗುರೋರ್ಯಸ್ಯಲಬ್ಧೋಽವತಾನ್ಮಾಂ
ಸ್ವಪ್ನೇ ಶ್ರೀಮಾನ್ ರಮೇಶಃ ಪ್ರಭುವರತನಯಾ ಸತ್ಯಭಾಮಾ ಸಮೇತಃ ॥೧॥

ದ್ವಾರಕಾನಗರದಲ್ಲಿ ಜಾಂಬವತಿಯು ಪೂಜಿಸುತ್ತಿದ್ದ ಸತ್ಯಭಾಮಾಸಮೇತನಾದ ಲಕ್ಷ್ಮೀಪತಿಯಾದ ಪಾಂಡುರಂಗನ ಪ್ರತಿಮೆಯು ಅತ್ಯದ್ಭುತವಾದುದು. ದ್ವಾರಕಾನಗರವೇ ಮುಳುಗಿಹೋಗುವ ಕಾಲ ಬಂದಾಗ ಅರ್ಜುನನು ಆ ಪ್ರತಿಮೆಯನ್ನು ಹಸ್ತಿನಾವತಿಯಲ್ಲಿ ತಂದಿಟ್ಟುಕೊಂಡು ಹಗಲಿರುಳೂ ಪೂಜಿಸುತ್ತಿದ್ದ. ಸಕಲರಿಗೂ ಸುಖನೀಡುವ ಆ ಪಾಂಡುರಂಗನ ಪ್ರತಿಮೆ ಕಾಲಕಳೆದಂತೆ ನದೀತೀರದ ಭೂಮಿಯಲ್ಲಿ ಹುದುಗಿಹೋಯಿತು. ಅನಂತರ ಭಗವಂತ ಜ್ಞಾನಿಶ್ರೇಷ್ಠರಾದ ಶ್ರೀ ಶ್ರೀಪಾದರಾಜರ ಕನಸಿನಲ್ಲಿ ಸೂಚನೆ ಕೊಟ್ಟು ತಾನೇ ಶ್ರೀಪಾದರಾಜರಿಂದ ಪೂಜೆಗೊಳ್ಳಲು ಬಂದು ನೆಲೆಸಿದ.

ಶ್ರೀಮತ್ ಶ್ರೀಪಾದರಾಜ ಪ್ರಮುಖ ಯತಿವರಾನಾದರಾಧೀತ ಶಾಸ್ತ್ರಾ-
ನಾಹೂಯಾತಿ ಪ್ರಮೋದಾ ಪ್ರವದತ ಭವತಾಂ ತಾವದೇವಾದ್ಯ ಶಿಷ್ಯಃ ।
ಯಾವತ್ಸಾಮರ್ಥ್ಯಮಸ್ತೀತ್ಯುದಿತವತಿ ಗುರೌ ಪ್ರಾಗುಪನ್ಯಸ್ತವಾನ್ಯಃ
ಶ್ರೀಮಾನಾದ್ಯಂತಯುಕ್ತಾಂ ಬುಧಸದಸಿ ಸುಧಾಂ ಸೋಽವತಾನ್ಮಾಂ
ಯತೀಂದ್ರಃ ॥ ೨ ॥

ಆದರದಿಂದ ಸಮಸ್ತಶಾಸ್ತ್ರಗಳನ್ನೂ ಅಧ್ಯಯನ ಮಾಡಿದ ಶ್ರೀಪಾದರಾಜರೇ ಮೊದಲಾದ ಯತಿಗಳನ್ನು ಗುರುಗಳಾದ ಶ್ರೀ ಸ್ವರ್ಣವರ್ಣತೀರ್ಥರು ಆಹ್ವಾನಿಸಿ ಅವರ ಸನ್ನಿಧಿಯಲ್ಲಿ ತಮ್ಮ ಶಿಷ್ಯರಲ್ಲಿ ಯಾರಾದರೂ ಯಥಾಶಕ್ತಿ ವ್ಯಾಖ್ಯಾನ ಮಾಡಲಿ ಎಂದು ಹೇಳಿದಾಗ ಆ ಸಂದರ್ಭದಲ್ಲಿ ಆದ್ಯಂತ ಸಾರಸಂಗ್ರಹ ಗ್ರಂಥಗಳಿಂದ ಕೂಡಿದ ಶ್ರೀಮನ್ನ್ಯಾಯಸುಧೆಯನ್ನೇ ವ್ಯಾಖ್ಯಾನಿಸಿದ ಆ ಯತಿವರೇಣ್ಯರು ನಮಗೆ ರಕ್ಷಕರಾಗಿರಲಿ.

ಸಾಯಂಕಾಲೇ ಕದಾಚಿತ್ ಗುಣಗಣಭರಿತೇ ಸ್ವರ್ಣವರ್ಣೇ ಯತೀಂದ್ರೇ
ದೂರೇಗ್ರಾಮಃ ಪುರಸ್ತಾತ್ಕಿಯತಿ ಕಥಯ ಮೇ ಬಾಲಕೇತಿ ಬ್ರುವಾಣೇ ।
ಸೂರ್ಯಂ ಮಾಂ ಸ್ಥೈರಭಾಂ ಸ್ವಂ ಸಕಲ ಬುಧಮಣೇ ಪಶ್ಯ ಕಿಂ ತ್ವಾಂ
ಬ್ರುವೇಹಂ
ಯೋ ವಾದೀತ್ಸ್ವರ್ಣವರ್ಣಂ ಗುರುಮಿತಿ ಸಹಸಾ ಸೋಽವತಾನ್ಮಾಂ
ಯತೀಂದ್ರಃ ॥ ೩ ॥

ಒಮ್ಮೆ ಗುಣಶಿಖಾಮಣಿಗಳಾದ ಸ್ವರ್ಣವರ್ಣಯತಿಗಳು ಪ್ರಯಾಣ ಮಾಡುತ್ತಾ, ಮುಂದೆ ಹೋಗಿದ್ದರು. ಅಲ್ಲಿಯೇ ಆಡುತ್ತಿದ್ದ ಬಾಲಕನನ್ನು ಬಳಿಗೆ ಕರೆದು, ಮಗು, ಗ್ರಾಮ ಇನ್ನೂ ಎಷ್ಟು ದೂರವಿದೆ ಎಂದು ಕೇಳಿದರು. ಆಗ ಆ ಬಾಲಕನು ನಸುನಗುತ್ತಾ ಮುಳುಗುವ ಸೂರ್ಯನನ್ನೂ ಕಂಗೆಡದೆ ಇನ್ನೂ ಇಲ್ಲೇ ಇರುವ ನನ್ನನ್ನೂ ನೋಡಿ ವಿವೇಕಿಗಳಾದ ತಾವೇ ಗ್ರಾಮದ ದೂರ ಊಹಿಸಿಕೊಳ್ಳಿ ಎಂದು ಸ್ವರ್ಣವರ್ಣಯತಿಗಳ ಮುಂದೆ ಸರಸರನೆ ಸರಸವಾಗಿಯೇ ಮಾತನಾಡಿದನು. ಅಂತಹ ಆ ಬಾಲಕನೇ ಮುಂದಿನ ಶ್ರೀಪಾದರಾಜರು, ಅವರು ನನ್ನನ್ನೂ ಸಹ ಬೇಗನೇ ಅನುಗ್ರಹಿಸಲಿ.

ಜಿತ್ವಾನೀಶಂ ನೃಪೇಣ ಪ್ರಬಲ ಗಜಪತಿಂ ಕಂಕಣದ್ವಂದ್ವಮೇಕಂ
ಯಸ್ಮೈ ದತ್ತಂ ಮನೋಜ್ಞಂ ತದನು ನರಪತೇ ಭೋಗನಾರ್ಯೋ ನಿಶಾಯಾಂ ।
ಯದ್ರೂಪಃ ಶ್ರೀರಮೇಶಃ ಪರಿಜನಸಹಿತೇ ಜಾಗರೂಕೇ ದ್ವಿತೀಯಮ್
ದತ್ತಂ ಭೂಪಾಳಮೌಳೌ ಪುನರಪಿ ದದತಾಸೋಽವತಾನ್ಮಾಂ ಯತೀಂದ್ರಃ॥೪॥

ಒಮ್ಮೆ ಸಾಳ್ವ ನರಸಿಂಹನು ಗಜಪತಿ ಮಹಾರಾಜನನ್ನು, ಗೆದ್ದುದರ ಕುರುಹಾಗಿ ಶ್ರೀಪಾದರಾಜರಿಗೆ ಗೌರವಪೂರ್ವಕವಾಗಿ ವಜ್ರಮಯವಾದ ಒಂದು ಕಂಕಣವನ್ನು ಸಮರ್ಪಿಸಿ ಮತ್ತೊಂದನ್ನು ತನ್ನ ಬಳಿಯೇ ಇರಿಸಿಕೊಂಡಿದ್ದ, ಆ ಕಂಕಣವು. ರಂಗವಿಠ್ಠಲನ ಲೀಲೆಯಿಂದಾಗಿ ಪ್ರಸಿದ್ಧ ನರ್ತಕಿಯ ಕೈಯಲ್ಲಿ ಕಂಗೊಳಿಸುತ್ತಿದ್ದಿತು. (ಭಗವಂತನೇ ಶ್ರೀಪಾದರಾಜರ ರೂಪ ಧರಿಸಿ ಆ ನರ್ತಕಿಗೆ ಕೊಟ್ಟುಬಂದಿದ್ದ.) ಇದನ್ನು ಕಂಡ ರಾಜ ಅವಳಿಂದ ಅದನ್ನು ಪಡೆದುಕೊಂಡು ತಿಜೋರಿಯಲ್ಲಿ ಎರಡನ್ನೂ ಭದ್ರಪಡಿಸಿ ಶ್ರೀಪಾದರಾಜರ ಬಳಿಗೆ ಪರಿವಾರ ಸಮೇತನಾಗಿ ಬಂದು ತಾನು ಕೊಟ್ಟಿದ್ದ ಕಂಕಣವನ್ನು ನೋಡಬೇಕೆಂದು ಹಠ ಹಿಡಿದ. ಹುಸಿನಗೆ ನಗುತ್ತಲೇ ಗುರುಗಳು ಪೂಜಾಪೆಟ್ಟಿಗೆಗೆ ಕೈಹಾಕಿ ವಜ್ರಕಂಕಣ ತೆಗೆದು ತೋರಿಸಲು ಕಂಗಾಲಾದ ರಾಜ ಅದನ್ನು ತೆಗೆದುಕೊಂಡು ಅರಮನೆಗೆ ಹೊರಟ. ಪುನಃ ತಿಜೋರಿ ತೆಗೆದಾಗ ಅಲ್ಲಿ ಒಂದೇ ಕಂಕಣ ಇದ್ದುದನ್ನು ಕಂಡು ಶ್ರೀಪಾದರಾಜರತ್ತ ಮನ ತಿರುಗಿಸಿದ. ಅಂತಹ ಗುರುಗಳು ದುಡುಕುವ ನಮ್ಮನ್ನೂ ಸಲಹಲಿ.

**ಪಾತುಃ ಶ್ರೀಪಾದರಾಜ ಸಖಿವರ ರಘುನಾಥಾರ್ಯಯುಕ್ತಃ ಕದಾಚಿತ್**
**ಗಂಗಾಸ್ನಾನಾಯ ಗಚ್ಛನ್ ಪತಿನೃಪಸದನಂ ಪ್ರಾಪ್ಯ ಭೈಕ್ಷ್ಯಂ ಯಯಾಚೇ ।**
**ಪಾದಪ್ರಕ್ಷಾಳನಾರ್ಥಂ ಸ್ಥಿತವತಿ ಯತಿಪೇ ಭರ್ತ್ಸನಾದಸ್ಯ ಕೋಪಾತ್**
**ಗೇಹೇ ದಗ್ಧೇಽತಿ ನಮ್ರಂ ಪದಯುಗಳಗತಂ ಯೋ ರರಕ್ಷಾವನೀಶಮ್ ॥ ೫ ॥**

ಶ್ರೀಪಾದರಾಜರು ತಮ್ಮ ಮಿತ್ರರಾದ ರಘುನಾಥಯತಿಗಳಿಂದ ಕೂಡಿದವರಾಗಿ ಗಂಗಾಸ್ನಾನಕ್ಕೆಂದು ಯಾತ್ರೆ ಆರಂಭಿಸಿದ್ದರು. ಆಗ ದಾರಿಯಲ್ಲಿ ರಾಜನು ಇವರಿಗೆ ಭಿಕ್ಷೆ ಏರ್ಪಡಿಸಲು ಒಪ್ಪಿ ಕಾಲ ತಳ್ಳತೊಡಗಿದನು. ಪಾದಪ್ರಕ್ಷಾಳನೆಗಾಗಿ ಎಂದು ರಾಜದ್ವಾರದಲ್ಲಿ ನಿಂತ ಶ್ರೀಪಾದರಾಜರು ನಿಧಾನತೆಗಾಗಿ ನಿಟ್ಟುಸಿರು ಬಿಟ್ಟರು. ಕಾಲವ್ಯರ್ಥವಾಯಿತೆಂಬ ಅವರ ಕೋಪದಿಂದ ಅರಮನೆಗೆ ಬೆಂಕಿ ಬಿದ್ದಿತು. ಅಪರಾಧವನ್ನು ಅರ್ಥಮಾಡಿಕೊಂಡ ರಾಜ ಶ್ರೀಪಾದರಾಜರ ಪಾದಕ್ಕೆ ಬಿದ್ದು ಪರಿತಪಿಸುತ್ತಿದ್ದ, ಅವನನ್ನು ರಕ್ಷಿಸಿದ ಶ್ರೀಪಾದರಾಜರು ನಮ್ಮನ್ನು ರಕ್ಷಿಸಲಿ.

**ಯಚ್ಛಿಷ್ಯೋ ವ್ಯಾಸರಾಜಃ ಪ್ರತಿಭಟಜನತಾ ಸರ್ವಗರ್ವಾಪಹರ್ತಾ**
**ಕರ್ತಾ ಗ್ರಂಥತ್ರಯಸ್ಯ ಪ್ರತಿಭಟ ವಿಜಯ ಪ್ರೋಚ್ಚಶಾಸ್ತ್ರೋತ್ತಮಸ್ಯ ।**
**ಪ್ರಖ್ಯಾತಾ ಯತ್ಪ್ರಶಿಷ್ಯಾ ಜಗತಿ ಚ ವಿಜಯೀಂದ್ರಾಖ್ಯ ಯೋಗೀಂದ್ರಚಂದ್ರಾ**
**ಶ್ರೀಮತ್ ಶ್ರೀವಾದಿರಾಜ ಪ್ರಮುಖ ಯತಿವರಾ ಸೋಽವತಾನ್ಮಾಂ**
**ಯತೀಂದ್ರಃ ॥ ೬ ॥**

ತಪಸ್ಸಂಪತ್ತಿನಂತೆ ಅವರ ಶಿಷ್ಯಸಂಪತ್ತೂ ಅಪಾರ. ಪ್ರತಿವಾದಿಗಳ ಗುಂಪಿನ ಗರ್ವವನ್ನೆಲ್ಲಾ ಅಪಹರಿಸುವ ಅವರೆಲ್ಲರ ಹೆಗ್ಗಳಿಕೆ, ಸ್ತೋತ್ರಗಳಿಗೆ ಪಾತ್ರರಾದ ಗ್ರಂಥತ್ರಯಕರ್ತೃಗಳೆಂದು ಪ್ರಖ್ಯಾತರಾದ ಶ್ರೀ ವ್ಯಾಸರಾಜರು ಇವರ ಶಿಷ್ಯರು. ಇನ್ನು ಅದ್ಭುತ ಗ್ರಂಥಕರ್ತೃಗಳಾದ ಯೋಗೀಂದ್ರಚಂದ್ರರೆಂದು ವಿಖ್ಯಾತರಾದ ಶ್ರೀ ವಿಜಯೀಂದ್ರರು ಇವರ ಪ್ರಶಿಷ್ಯರು ಶ್ರೀ ವಾದಿರಾಜರೇ ಮೊದಲಾದ ಪ್ರಮುಖ ಯತಿಗಳೂ ಸಹ ಶ್ರೀಪಾದರಾಜರ ಪ್ರಭಾವ ಪ್ರವಾಹದಲ್ಲಿ ತೇಲಿ ಬಂದವರೇ. ಅಂತಹ ಪ್ರೌಢರಾದ ಶ್ರೀಪಾದರಾಜರು ನಮ್ಮನ್ನು ರಕ್ಷಿಸಲಿ.

**ಯದ್ವಾಗ್ವಜ್ರಾಭಿದೋಚ್ಛ ಪ್ರಬಲತಮ ಮಹಾಗ್ರಂಥ ವಜ್ರೇಣ ಹೃಷ್ಯ**
**ದುರ್ವಾದಿಕ್ಷ್ಮಾಧರಾಣಾಂ ಯತಿವರಸುರಪಚ್ಛೇದಯಾಮಾಸ ಪಕ್ಷಾನ್ ।**
**ಯಸ್ಯ ಶ್ರೀವಾದಿರಾಜ ಪ್ರಮುಖ ಯತಿವರ್ಯೈರ್ವಣಿತು ನೈವ ಶಕ್ಯಮ್**
**ಮಾಹಾತ್ಮ್ಯಂ ತಾಪಸೇಂದ್ರಃ ಸ ಭವತು ನಿತರಾಂ ಭೂಯಸೇ**
**ಶ್ರೇಯಸೇ ಮೇ ॥ ೭ ॥**

ಶ್ರೀಮನ್ನ್ಯಾಯಸುಧೆಗೆ ವ್ಯಾಖ್ಯಾನವಾದ ವಾಗ್ವಜ್ರವೆಂಬ ಮಹಾಗ್ರಂಥ ವಜ್ರದ ಸಹಾಯದಿಂದ, ಯತಿಕುಲದೇವೇಂದ್ರರೆನಿಸಿದ ಶ್ರೀಪಾದರಾಜರು, ದುರ್ವಾದಿಗಳೆಂಬ ಪರ್ವತದ, ಅಹಂಕಾರಗಳೆಂಬ ರೆಕ್ಕೆಗಳನ್ನೆಲ್ಲಾ ಕತ್ತರಿಸಿದ್ದಾರೆ. ಆದರ ಮಹಾತ್ಮೆಯು ಯುಕ್ತಿಶೂರರಾದ ವಾದಿರಾಜರ ವರ್ಣನೆಗೆ ನಿಲುಕದೆ ಇರುವಷ್ಟು ನಿಬಿಡವಾದುದು. ಅಂತಹ ಅದ್ಭುತಗ್ರಂಥಕರ್ತೃಗಳಿಂದ, ತಾಪಸ ಶ್ರೇಷ್ಠರಾದ ಶ್ರೀಪಾದರಾಜರು ನಮಗೆ ಮಂಗಳ ನೀಡಲಿ.

**ನೀಲಾಪಾರ್ಥಾರ್ಚಿತಾಂಘ್ರಿಃ ಕಲುಷಯ ಚ ಹರೇ ಭೀಮರಥ್ಯಾಸ್ತುತೀರೇ**
**ರಂಗಕ್ಷೇತ್ರೇಽಥ ಗುಪ್ತಃ ಸಕಲ ಸುರಪತಿರ್ವೇಣುಗೋಪಾಲಕೃಷ್ಣ ।**
**ಸ್ವಪ್ನೇ ಲಬ್ಧೋಽಯಮಸ್ಮಾ ದ್ವಿಜವರ ಗುರವೇ ವ್ಯಾಸರಾಜಾಯ ಯೇನಾ-**
**ದಾಯೀ ಶ್ರೀಪಾದರಾಜಃ ಸ ಭವತು ನಿತರಾ ಭೂಯಸೇ ಶ್ರೇಯಸೇ**
**ಮೇ ॥ ೮ ॥**

ಇತಿ ಶ್ರೀ ಶ್ರೀನಿಧಿಯತಿ ವಿರಚಿತ ಶ್ರೀ ಶ್ರೀಪಾದರಾಜಾಷ್ಟಕಂ ಸಂಪೂರ್ಣಮ್

ನೀಳಾದೇವಿ ಹಾಗೂ ಅರ್ಜುನರಿಂದ ಆರಾಧಿಸಲ್ಪಟ್ಟ ಹರಿಯ ಆ ಪ್ರತಿಮೆ ಭೀಮರಥೀ ನದೀ ತೀರದ ಪಾಂಡುರಂಗಕ್ಷೇತ್ರದಲ್ಲಿ ಅಡಗಿಹೋಗಿತ್ತು. ಆ ವೇಣು ಗೋಪಾಲನ ಪ್ರತಿಮೆ ಮುಂಚೆ ಸ್ವಪ್ನದಲ್ಲಿ ನಿರ್ದೇಶಿಸಲ್ಪಟ್ಟು ಅನಂತರ ಪ್ರಾಪ್ತವಾಗಿತ್ತು. ಅದನ್ನು ಶ್ರೀಪಾದರಾಜರೇ ವ್ಯಾಸರಾಜರಿಗೆ ಆದರದಿಂದ ನೀಡಿದರು. ಅಂತಹ ಶ್ರೀಪಾದರಾಜರು ನಮಗೆ ನಿರಂತರ ಮಂಗಳಕ್ಕೆ ಕಾರಣ ರಾಗಲಿ.

ಹೀಗೆ ಶ್ರೀ ಶ್ರೀನಿಧಿಯತಿಗಳಿಂದ ರಚಿತವಾದ
ಶ್ರೀ ಶ್ರೀಪಾದರಾಜಾಷ್ಟಕವೆಂಬ ಸ್ತೋತ್ರವು ಮುಗಿಯಿತು.

★ ★ ★

ಶ್ರೀ ಶ್ರೀನಿಧಿಯತಿ ವಿರಚಿತ

# ನವಪದ್ಯಸುರತ್ನಮಾಲಾ

ಶ್ರೀಕಾಂತತೀರ್ಥ ಗುರುರಾಜ ಕರಾಬ್ಜಜಾತ
ಶ್ರೀ ಶ್ರೀನಿಧಿರ್ಯತಿರುದಾರ ಗುಣೋಲ್ಲಸಂತೀಮ್ ।
ಶ್ರೀಪಾದರಾಜ ನವಪದ್ಯ ಸುರತ್ನಮಾಲಾಂ
ಭಕ್ತ್ಯಾ ಕರೋಮಿ ಗುರುರಾಜ ವರಪ್ರಸಾದಾತ್ ॥ ೧ ॥

ಶ್ರೀಕಾಂತತೀರ್ಥ ಗುರುಗಳ ಕರಕಮಲಸಂಜಾತರಾದ ಗುಣನಿಧಿಗಳಾದ ಶ್ರೀಶ್ರೀನಿಧಿತೀರ್ಥರೆಂಬ ನಾವು ಶ್ರೀಪಾದರಾಜರ ಬಗೆಗೆ ನವಪದ್ಯಗಳ ಒಂದು ರತ್ನಮಾಲೆಯನ್ನು ಶ್ರೀಪಾದರಾಜರ ಅನುಗ್ರಹದಿಂದ ಭಕ್ತಿಯಿಂದ ರಚಿಸಿರುವೆ.

ಶ್ರೀಪೂರ್ಣಬೋಧಕುಲವಾರ್ಧಿಸುಧಾಕರಾಯ
ಶ್ರೀವ್ಯಾಸರಾಜಗುರವೇ ಯತಿಶೇಖರಾಯ ।
ಶ್ರೀರಂಗವಿಠ್ಠಲಪದಾಂಬುಜ ಬಂಭರಾಯ
ಶ್ರೀಪಾದರಾಜ ಗುರವೇಽಸ್ತು ನಮಶ್ಶುಭಾಯ ॥ ೨ ॥

ಶ್ರೀಪೂರ್ಣಬೋಧರೆಂಬ ಮಧ್ವಾಚಾರ್ಯರ ವಂಶಸಾಗರದಲ್ಲಿ ಕಂಗೊಳಿಸುವ ಚಂದ್ರನೆನಿಸಿದ, ವ್ಯಾಸರಾಜರಿಗೂ ಗುರುಗಳಾದ; ರಂಗವಿಠ್ಠಲನ ಪಾದ ಕಮಲದಲ್ಲಿ ಆಸ್ವಾದಿಸುತ್ತಾ ಮುಳುಗಿರುವ ದುಂಬಿಯೆನಿಸಿದ, ಮಂಗಳಪ್ರದವಾದ ಶ್ರೀಪಾದರಾಜರಿಗೆ ನಮಸ್ಕಾರಗಳು.

ಸಂಪೂರಿತಾಖಿಲ ಜನೋರು ಮನೋರಥಾಯ
ಶ್ರೀಮನ್ನೃಸಿಂಹಸರಸೀತಟ ಸಂಸ್ಥಿತಾಯ ।
ಶ್ರೀಮತ್ಸುವರ್ಣವರ್ಣಸಮವರ್ಣ ಕರಾಬ್ಜಜಾಯ
ಶ್ರೀಪಾದರಾಜಗುರವೇಽಸ್ತು ನಮಶ್ಶುಭಾಯ ॥ ೩ ॥

ಎಲ್ಲ ಜನರ ಎಲ್ಲ ಬಗೆಯ ಮನೋರಥಗಳನ್ನು ಕೈಗೂಡಿಸುವ, ನೃಸಿಂಹ ಸರೋವರದ ತಟದಲ್ಲಿಯೇ ಸಂಸ್ಥಾಪಿತರಾಗಿರುವ, ಸ್ವರ್ಣವರ್ಣತೀರ್ಥರ ಕರ ಕಮಲಸಂಜಾತರಾದ, ಪರಮಮಂಗಳಕರರಾದ, ಶ್ರೀಪಾದರಾಜಗುರುಗಳಿಗೆ ನಮಸ್ಕಾರಗಳು.

ಶ್ರೀವ್ಯಾಸರಾಜ ಫಣಿಬಂಧ ನಿವಾರಕಾಯ
ತದ್ಭಾಷಯೈವ ಫಣಿರಾಜ ಸುತೋಷಕಾಯ ।
ಶ್ರೀಮತ್ಸುರತ್ನ ಖಚಿತೋಜ್ಜ್ವಲ ಕುಂಡಲಾಯ
ಶ್ರೀಪಾದರಾಜ ಗುರವೇಽಸ್ತು ನಮಶ್ಶುಭಾಯ ॥ ೪ ॥

ಶ್ರೀವ್ಯಾಸರಾಜರಿಗೆ ಒದಗಿದ ಸರ್ಪಬಂಧವನ್ನು ಸರಳವಾಗಿಯೇ ಬಿಡುಗಡೆಗೊಳಿಸಿದ, ಸರ್ಪದ ಭಾಷೆಯಿಂದಲೇ ಮಾತನಾಡಿ ಪದ್ಮನಾಭತೀರ್ಥರಿಗೂ ಪರಮ ಸಂತೋಷ ತಂದ, ಚೆನ್ನಾಗಿ ರತ್ನಖಚಿತವಾದ ಕಂಗೊಳಿಸುವ ಕರ್ಣಕುಂಡಲಗಳುಳ್ಳ ಪರಮಮಂಗಳಕರರಾದ ಶ್ರೀಪಾದರಾಜರಿಗೆ ನಮಸ್ಕಾರಗಳು.

ಶ್ರೀಗೋಪಿಕಾಪತಿ ನಿವೇದಿತ ಷಷ್ಟಿಶಾಕ-
ಮುಖ್ಯೋರು ಭೋಜನ ವಿದೂಷಣ ತತ್ಪರಾಣಾಮ್ ।
ಸಂದರ್ಶಿತೋರು ನಿಜಕುಕ್ಷಿಗತಾರ್ದ್ರಶಾಕಾನ್
ಶ್ರೀಪಾದರಾಜ ಗುರವೇಽಸ್ತು ನಮಶ್ಶುಭಾಯ ॥ ೫ ॥

ಗೋಪೀವಲ್ಲಭನಾದ ಭಗವಂತನಿಗೆ ಅರವತ್ತಕ್ಕೂ ಮೀರಿದ ಬಗೆಬಗೆಯ ಕಾಯಿಪಲ್ಲೆಗಳನ್ನೂ ನಿವೇದಿಸಿದ ಮಹಾಮಹಿಮರು. ಶ್ರೀಪಾದರಾಜರು ಹಸಿಯಾದುದನ್ನೇ ನಿವೇದಿಸಿದ್ದಾರೆಂದು ಹಸಗಳಿಯುವ ಜನರಿಗೆ ತಮ್ಮ ಉದರದಲ್ಲೂ ಹಸಿತರಕಾರಿಗಳಂತೇ ಇವೆಯೆಂದು ನಿರೂಪಿಸಿದ ನಿಚ್ಚಳ ಭಕ್ತರು ಶ್ರೀಪಾದ ರಾಜರು. ಅವರು ನಮಗೆ ಮಂಗಳ ಮಾಡಲಿ.

ಶ್ರೀಮದ್ಯತೀಶ ರಘುನಾಥ ಮುನೇರ್ವಿಮಾನಾತ್
ಪುಷ್ಪೇ ಸ್ವಮೂರ್ಧ್ನಿಪ್ರತತಿ ಪ್ರಸಮೀಕ್ಷ್ಯಚೋಕ್ತಾ ।
ಸಂಪ್ರೇರಿತೋರು ರಘುನಾಥ ಮುನೀಶ್ವರಾಯ
ಶ್ರೀಪಾದರಾಜ ಗುರವೇಽಸ್ತು ನಮಶ್ಶುಭಾಯ ॥ ೬ ॥

ರಘುನಾಥಯತಿಗಳು ವಿಮಾನದಲ್ಲಿ ಅಗೋಚರರಾಗಿ ಪಯಣಿಸುತ್ತಿರುವಾಗಲೇ ಮೇಲಿಂದ ತಮ್ಮ ಮೇಲೆ ಬಿದ್ದ ಹೂವನ್ನು ತಿಳಿದೇ ಶ್ರೀಪಾದರಾಜರು ಕತ್ತೆತ್ತಿ ನೋಡಿದರು. ಅವರ ಪಯಣದಂತೆ ರಘುನಾಥ ಯತಿಗಳ ಅಂತರಂಗವನ್ನೂ ಅರಿತ ಶ್ರೀಪಾದರಾಜರು ದೈವೀಸಂಕೇತವನ್ನು ತಾವೂ ಸಹ ಅರಿತರು. ಅಂತಹ ಪರಮ ಮಂಗಳಕರರಾದ ಶ್ರೀಪಾದರಾಜರು ನಮಗೆ ಮಂಗಳ ಮಾಡಲಿ.

ಶಂಖಸ್ಥಿತೇನ ಪಯಸಾ ದ್ವಿಜಘಾತಪಾಪೇ
ದೂರೀಕೃತೇ ಬಹುಜನೇಷು ವಿ ಶಂಕಿತೇಷು ।
ತೇನೈವ ಶುದ್ಧಮಲಿನಾತಿಪಟಚ್ಛರಾಯ
ಶ್ರೀಪಾದರಾಜ ಗುರವೇಽಸ್ತು ನಮಶ್ಶುಭಾಯ ॥ ೭ ॥

ಭಯಂಕರವಾದ ಬ್ರಹ್ಮಹತ್ಯೆಯು ಭೂಪಾಲನಿಗೆ ಬಂದೊದಗಲು ಶ್ರೀಪಾದರಾಜರು ಕೇವಲ ಶಂಖೋದಕದಿಂದಲೇ ಅದನ್ನು ದೂರ ಮಾಡಿದರು. ಬ್ರಹ್ಮಹತ್ಯೆಯು ಹೊರಟುಹೋಗಿದ್ದರೂ ಬಳಿಯಿದ್ದವರ ಸಂಶಯ ಇನ್ನೂ ಹೋಗಿರಲಿಲ್ಲ. ಅವರೆಲ್ಲಾ ಶಂಕಿಸಿದಾಗ ನಿಶ್ಶಂಕಿತವಾಗಿ ಗೇರು ಎಣ್ಣೆಯಲ್ಲಿ ಅದ್ದಿ ಕಪ್ಪಾಗಿದ್ದ ಬಟ್ಟೆಯನ್ನೇ ತಿರುಗಿ ಬಿಳಿಯನ್ನಾಗಿಸಿ ನಿಶ್ಚಯಮಾಡಿಸಿದ ಪರಮಮಂಗಳಕರರಾದ ಶ್ರೀಪಾದರಾಜರಿಗೆ ನಮಸ್ಕಾರಗಳು.

ಶ್ರೀಮನ್ನೃಸಿಂಹಸರಸೀ ಪಯಸಿ ಪ್ರಮೋದಾ-
ದ್ಧ್ಯಾಯಾಮಿ ತಿಷ್ಠ ಸರಸೀ ಶುಭಕಾರಿ ತೀರೇ ।
ಸ್ವಪ್ನೇಽನಿಬೋಽಧ್ಯ ನಳಿನೀ ಜಯದಕ್ಷಗಾಭೂತ್
ಶ್ರೀಪಾದರಾಜಗುರವೇಽಸ್ತು ನಮಶ್ಶುಭಾಯ ॥ ೮ ॥

'ನೀನಿರುವ ನೃಸಿಂಹತೀರ್ಥದ ನೀರಿನಲ್ಲೇ ನಾ ಬಂದು ನೆಲೆಸುವೆ. ನನಗಾಗಿ ನೀನು, ತೀರದಲ್ಲೇ ನಿಂತಿರು' ಎಂದು ಕನಸಿನಲ್ಲೇ ಸೂಚಿಸಿದ ಆ ಗಂಗೆ ತಿಳಿಸಿದಂತೆ ಶ್ರೀಪಾದರಾಜರಿಗಾಗಿ ಆ ನೀರಿನಲ್ಲೇ ಬಂದು ನೆಲೆಸಿದಳು. ನೂರಾರು ಜನರಿಗೆ ಗಂಗಾಸ್ನಾನ ಸುಲಭವಾಯಿತು. ಅಂತಹ ಮಂಗಳಕರರಾದ ಶ್ರೀಪಾದರಾಜರಿಗೆ ನಮ್ಮ ನಮಸ್ಕಾರಗಳು.

ದುರ್ವಾದಿವಾರಣ ವಿದಾರಣ ದೀಕ್ಷಿತಾಯ
ಶ್ರೀಮದ್ರಮೇಶಚರಣಾಬ್ಜಗುಹಾಶ್ರಯಾಯ ।
ವ್ಯಾಖ್ಯಾನಿನಾದ ರುಚಿರೋರು ಮೃಗಾಧಿಪಾಯ
ಶ್ರೀಪಾದರಾಜ ಗುರವೇಽಸ್ತು ನಮಶ್ಶುಭಾಯ ॥ ೯ ॥

ದುರ್ವಾದಿಗಳೆಂಬ ಮದಗಜಗಳನ್ನು ಬಗ್ಗುಬಡಿಯುವುದರಲ್ಲಿ ಪಣ ತೊಟ್ಟ, ರಮಾಪತಿಯಾದ ಗೋಪೀನಾಥನ ಪಾದಕಮಲಗಳೆಂಬ ನಿವಾಸದಲ್ಲೇ ನೆಲೆಸಿರುವ, ವ್ಯಾಖ್ಯಾನ ಮಾಡುವ ಸ್ಪಷ್ಟತೆಯಲ್ಲಿ, ಧ್ವನಿಯಲ್ಲಿ, ಸಿಂಹದಂತಿರುವ ಪರಮಮಂಗಳಕರರಾದ ಶ್ರೀಪಾದರಾಜರಿಗೆ ನಮಸ್ಕಾರಗಳು.

ಕಸ್ತೂರಿಕಾದಿ ಸಮಲಂಕೃತ ದಿವ್ಯದೇಹಂ
ದೃಷ್ಟ್ವಾವಿದೂಷಯತಿ ಮೂಢಜನೇ ಕ್ಷಣೇನ ।
ತತ್ಯಾಗಧಾರಿತ ತನೂಃ ಪರಿರಕ್ಷಕಾಯ
ಶ್ರೀಪಾದರಾಜ ಗುರುವೇಽಸ್ತು ನಮಶ್ಶುಭಾಯ ॥ ೧೦ ॥

ಕಸ್ತೂರಿ, ರತ್ನ, ವೈಢೂರ್ಯ ಮೊದಲಾದ ರಾಜಠೀವಿಯಿಂದ ಅಲಂಕೃತರಾದ ಈ ಯತಿವರ್ಯರನ್ನು ಕಂಡು ಮೂಢಜನರು ಇವರಿಗೆ ವೈರಾಗ್ಯವೇ ಇಲ್ಲ ಎಂದು ಮೂದಲಿಸಿದರು. ಆ ಕ್ಷಣದಲ್ಲೇ ಅವನ್ನು ತೊರೆದ ಶರೀರವನ್ನು ಪ್ರದರ್ಶಿಸಿ ಶೋಭಿಸಿದ ತಮ್ಮ ಪರಿವಾರದವರನ್ನೂ ಪರಿಪರಿಯಾಗಿ ರಕ್ಷಿಸುವ ಪರಮ ಮಂಗಳಕರರಾದ ಶ್ರೀಪಾದರಾಜರು ನಮಗೆ ಮಂಗಳ ಮಾಡಲಿ.

ಶ್ರೀಪಾದರಾಜ ನವಪದ್ಯ ಸುರತ್ನಮಾಲಾಂ
ಯೇಧಾರಯಂತ್ಯನುದಿನಂ ಭುವಿಶುದ್ಧಭಾವಾಃ ।
ವೃಂದಾವನಸ್ಯ ಪುರತಸ್ಸಕಲೇಷ್ಟದಶ್ಚ
ಶ್ರೀಪಾದರಾಜಗುರುರಾಜ ಹೃದಬ್ಜವಾಸೀ ॥ ೧೧ ॥

ಶ್ರೀ ಶ್ರೀನಿಧಿಯತಿ ವಿರಚಿತ ನವಪದ್ಯಸುರತ್ನಮಾಲಾ ಸಂಪೂರ್ಣಮ್

ಶ್ರೀಪಾದರಾಜರನ್ನು ಕುರಿತಾದ ಈ ನವರತ್ನ ಶ್ಲೋಕಮಾಲಿಕೆಯನ್ನು ವೃಂದಾವನದ ಮುಂದೆ ನಿರ್ಮಲ ಮನೋಭಾವದಿಂದ ಯಾರು ಪ್ರತಿದಿನವೂ ಪಠಿಸುವರೋ ಅವರಿಗೆ ಶ್ರೀಪಾದರಾಜರ ಹೃದಯಾಂತರ್ಯಾಮಿಯಾದ ಭಗವಂತನು ಎಲ್ಲ ಬಗೆಯ ಅಭೀಷ್ಟಗಳನ್ನು ನೀಡುವನು.

ಹೀಗೆ ಶ್ರೀ ಶ್ರೀನಿಧಿಯತಿಗಳಿಂದ ರಚಿತವಾದ ನವಪದ್ಯಸುರತ್ನಮಾಲಾ
ಎಂಬ ಸ್ತೋತ್ರವು ಮುಗಿಯಿತು.

★ ★ ★